


# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 24-03-2021 ಪ್ರಶ್ನೆ ಸಂಖ್ಯೆ : 1769 (2040)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಕೆ.ಎ. ತಿಪ್ಪೇಸ್ವಾಮಿ (ನಾಮನಿರ್ದೇಶನ ಹೊಂದಿದವರು)

ಉತ್ತರ ನೀಡಬೇಕಾದ ದಿನಾಂಕ : 24-03-2021

ಉತ್ತರಿಸುವ ಸಚಿವರು: ಮಾನ್ಯ ವಸತಿ ಸಚಿವರು

ವಿಷಯ : ಗ್ರಾಮೀಣ ಮತ್ತು ಪಟ್ಟಣ ಪ್ರದೇಶಗಳಲ್ಲಿ ವಸತಿ ಸೌಲಭ್ಯದ ಕೊರತೆ

(ಅ) ರಾಜ್ಯದಲ್ಲಿನ ಗ್ರಾಮೀಣ ಮತ್ತು ಪಟ್ಟಣ ಪ್ರದೇಶಗಳಲ್ಲಿ ವಸತಿ ಸೌಲಭ್ಯದ ಕೊರತೆ ಕುರಿತು ಕೇಂದ್ರ ಅಥವಾ ರಾಜ್ಯ ಸರ್ಕಾರಗಳು ಯಾವಾಗ ಸಮೀಕ್ಷೆ/ಗಣತಿ ನಡೆಸಿದೆ; ಈ ಸಮೀಕ್ಷೆ/ಗಣತಿ ಅನ್ವಯ ರಾಜ್ಯದಲ್ಲಿ ಗ್ರಾಮಾಂತರ ಮತ್ತು ಪಟ್ಟಣ ಪ್ರದೇಶಗಳಲ್ಲಿ ವಸತಿಹೀನರಾಗಿರುವವರ ಸಂಖ್ಯೆ ಎಷ್ಟು ; (ಜಿಲ್ಲಾವಾರು ಮತ್ತು ತಾಲ್ಲೂಕುವಾರು ಮಾಹಿತಿ ನೀಡುವುದು)

(ಆ) ಈ ಸಮೀಕ್ಷೆ/ಗಣತಿಯಂತೆ ರಾಜ್ಯದ ವಿವಿಧ ಭಾಗಗಳಲ್ಲಿ ಗುರುತಿಸಲಾಗಿರುವ ಕೊಳಚೆ ಪ್ರದೇಶಗಳು ಯಾವುವು; (ಸಂಪೂರ್ಣ ವಿವರ ನೀಡುವುದು)

(ಇ) ಕೇಂದ್ರ ಸರ್ಕಾರದ ವಸತಿ ಮತ್ತು ನಗರ ವ್ಯವಹಾರ ಮಂತ್ರಾಲಯದ ಪ್ರಧಾನ ಮಂತ್ರಿ ಆವಾಸ್ ಯೋಜನೆಯಂತೆ ಗ್ರಾಮಾಂತರ ಮತ್ತು ನಗರ ಪ್ರದೇಶಗಳಲ್ಲಿ ವಸತಿ ಕೊರತೆಯನ್ನು ನೀಗಿಸಲು ರಾಜ್ಯ ಸರ್ಕಾರ ಹಮ್ಮಿಕೊಂಡಿರುವ ಕಾರ್ಯಕ್ರಮ/ಯೋಜನೆಗಳು ಯಾವುವು ; (ಸಂಪೂರ್ಣ ಮಾಹಿತಿ ನೀಡುವುದು)

(ಈ) ಕೋವಿಡ್-19 ಸೋಂಕು ಹರಡುವಿಕೆ ಸಂದರ್ಭದಲ್ಲಿ ಘೋಷಿತವಾದ, ಪ್ರಧಾನ ಮಂತ್ರಿ ಆವಾಸ್ ಯೋಜನೆಯಡಿಯಲ್ಲಿನ ಕೈಗೆಟಕುವ ವಸತಿಯೋಜನೆ (Affordable Housing Scheme) ಅನುಷ್ಠಾನ ರಾಜ್ಯದಲ್ಲಿ ಯಾವ ಹಂತದಲ್ಲಿದೆ ; (ಸಂಪೂರ್ಣ ಮಾಹಿತಿ ನೀಡುವುದು)

(ಉ) ಪ್ರಧಾನ ಮಂತ್ರಿ ಆವಾಸ್ ಯೋಜನೆಯು 2022 ರವರೆಗೆ ಮಾತ್ರ ಅನುಷ್ಠಾನದಲ್ಲಿ ಇರುವುದಾಗಿ ಘೋಷಿತವಾಗಿದ್ದು, ಈ ಅವಧಿಯಲ್ಲಿ ರಾಜ್ಯದಲ್ಲಿನ ಪ್ರತಿಯೊಬ್ಬ ವಸತಿಹೀನರಿಗೆ ವಸತಿ ಒದಗಿಸಲು ಸಾಧ್ಯವೇ; ಇಲ್ಲದಿದ್ದಲ್ಲಿ, ಈ ಯೋಜನೆಯನ್ನು ಮುಂದುವರೆಸುವಂತೆ ರಾಜ್ಯ ಸರ್ಕಾರ ಕೇಂದ್ರ ಸರ್ಕಾರವನ್ನು ಕೋರುವುದೇ ಮತ್ತು

ಮುಂದಿನ 5 ವರ್ಷಗಳಲ್ಲಿ ರಾಜ್ಯದಲ್ಲಿ ಎಲ್ಲಾ ವಸತಿಹೀನರಿಗೆ ವಸತಿ ಒದಗಿಸಲು ರಾಜ್ಯ ಸರ್ಕಾರ ಆಯವ್ಯಯದಲ್ಲಿ ಅಗತ್ಯ ಅನುದಾನ ಒದಗಿಸುವುದೇ ? (ವಿವರ ಒದಗಿಸುವುದು)